# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 755

**ಮಾನ್ಯ ಸದಸ್ಯರ ಹೆಸರು** : ಶ್ರೀ ಎನ್.ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

**ಉತ್ತರಿಸಬೇಕಾದ ದಿನಾಂಕ** : 20-12-2021

**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರವಾಸೋದ್ಯಮ ಇಲಾಖೆಯಿಂದ ಸಾರ್ವಜನಿಕರು ಮತ್ತು ಪ್ರವಾಸಿಗಳಿಗೆ ಅನುಕೂಲವಾಗಲು ರೂಪಿಸಿರುವ ಯೋಜನೆಗಳೇನು; ಈ ಯೋಜನೆಗಳ ಮಾನದಂಡಗಳೇನು; (ಸಂಪೂರ್ಣ ವಿವರ ನೀಡುವುದು) | ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸಿಗರ ಅನುಕೂಲಕ್ಕಾಗಿ ರೂಪಿಸಿರುವ ಪ್ರಮುಖ ಯೋಜನೆಗಳ ವಿವರ ಹಾಗೂ ಮಾನದಂಡಗಳ ವಿವರ ಈ ಕೆಳಕಂಡಂತಿದೆ: |

| ಯೋಜನೆಗಳು | ವಿವರ | ಮಾನದಂಡಗಳು |
|---|---|---|
| ಬಂಡವಾಳ ವೆಚ್ಚಗಳು | ಪ್ರವಾಸಿ ತಾಣಗಳಲ್ಲಿ ಪ್ರವಾಸಿಗರ ಅನುಕೂಲಕ್ಕಾಗಿ ಯಾತ್ರಿನಿವಾಸ/ ಡಾರ್ಮಿಟರಿ, ಕುಡಿಯುವ ನೀರು, ಶೌಚಾಲಯ ಇತ್ಯಾದಿ ಮೂಲ ಸೌಲಭ್ಯಗಳ ಅಭಿವೃದ್ಧಿ. | ಮಾನ್ಯ ಶಾಸಕರು, ಸಚಿವರು ಇತರೆ ಜನ ಪ್ರತಿನಿಧಿಗಳು ಮತ್ತು ಸಂಘ ಸಂಸ್ಥೆಗಳಿಂದ ಸ್ವೀಕೃತವಾಗುವ ಪ್ರವಾಸಿ ಮೂಲ ಸೌಲಭ್ಯಗಳ ಪ್ರಸ್ತಾವನೆ ಸಂಬಂಧ ಜಿಲ್ಲಾಧಿಕಾರಿ/ಇಲಾಖೆಯ ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು ಇವರುಗಳಿಂದ ಈ ಕೆಳಕಂಡಂತೆ ವರದಿ ಪಡೆಯಲಾಗುವುದು.<br>• ಪ್ರವಾಸಿ ತಾಣಕ್ಕೆ ಭೇಟಿ ನೀಡುವ ಪ್ರವಾಸಿಗರ ಅಂಕಿ ಅಂಶ.<br>• ಪ್ರವಾಸಿ ತಾಣದ ಚಾರಿತ್ರಿಕ ಸಾಂಸ್ಕೃತಿಕ/ ಪಾರಂಪರಿಕ ಐತಿಹಾಸಿಕ ಮಹತ್ವ.<br>• ಯಾತ್ರಿನಿವಾಸ/ ಡಾರ್ಮಿಟರಿ ನಿರ್ಮಾಣ ಮಾಡಲು ಅಗತ್ಯವಿರುವ ಜಮೀನನ್ನು ಇಲಾಖೆಯ ಹೆಸರಿಗೆ ಹಕ್ಕಿನ ಸಮೇತ ವರ್ಗಾಯಿಸುವುದು.<br>• ಅನುದಾನದ ಲಭ್ಯತೆ. |
| ಕೆ.ಟಿ.ವಿ.ಜಿ. | ಕರ್ನಾಟಕ ಟೂರಿಸಂ ವಿಷನ್ ಗ್ರೂಪ್ ಶಿಫಾರಸ್ಸಿನಡಿ ಕೈಗೊಳ್ಳುವ ಕಾಮಗಾರಿಗಳು | ಕರ್ನಾಟಕ ಟೂರಿಸಂ ವಿಷನ್ ಗ್ರೂಪ್ ನೀಡುವ ಶಿಫಾರಸ್ಸುಗಳನ್ವಯ ಪ್ರವಾಸಿ ತಾಣಗಳಲ್ಲಿ ಪ್ರವಾಸಿ ಸೌಲಭ್ಯಗಳ ಅಭಿವೃದ್ಧಿ. |
| ನಬಾರ್ಡ್ | ಕೂಡು ರಸ್ತೆಗಳ ಅಭಿವೃದ್ಧಿ | ಪ್ರವಾಸಿ ತಾಣಗಳನ್ನು ಸಂಪರ್ಕಿಸುವ ಕೂಡು ರಸ್ತೆಗಳ ಅಭಿವೃದ್ಧಿ. |

| | | | | | |
|---|---|---|---|---|---|
| | | | ಎಸ್.ಸಿ.ಎಸ್.ಪಿ/ ಟಿಎಸ್.ಪಿ ಹಾಗೂ ಹಿಂದುಳಿದ ಮತ್ತು ಅಲ್ಪಸಂಖ್ಯಾತ ವರ್ಗದ ಯೋಜನೆ | 1. ಪ್ರವಾಸಿ ಟ್ಯಾಕ್ಸಿ ಸಹಾಯಧನ ವಿತರಣೆ ಯೋಜನೆ | ಎಸ್.ಸಿ.ಎಸ್.ಪಿ./ಟಿ.ಎಸ್.ಪಿ. ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಸಾಮಾನ್ಯ ಯೋಜನೆಯಡಿಯಲ್ಲಿ, ಹಿಂದುಳಿದ ಮತ್ತು ಅಲ್ಪಸಂಖ್ಯಾತ ವರ್ಗದ ವಿದ್ಯಾವಂತ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸರ್ಕಾರದ ಸಹಾಯಧನ ರೂ.3.00 ಲಕ್ಷಗಳೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಣೆ ಯೋಜನೆ ಸಂಬಂಧ ಸರ್ಕಾರ ಹೊರಡಿಸಿರುವ ಮಾನದಂಡಗಳನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| | | | | 2. ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮ | ಎಸ್.ಸಿ.ಎಸ್.ಪಿ./ಟಿ.ಎಸ್.ಪಿ. ಯೋಜನೆಯಡಿ ಸರ್ಕಾರಿ ಪ್ರೌಢ ಶಾಲೆಗಳಲ್ಲಿ, ಮೊರಾರ್ಜಿ ಮತ್ತು ಕ್ರೈಸ್ಟ್ ವಸತಿ ಶಾಲೆಗಳಲ್ಲಿ ಕಲಿಯುತ್ತಿರುವ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಹಾಗೂ ಸಾಮಾನ್ಯ ಯೋಜನೆಯಡಿ ಹಿಂದುಳಿದ ಹಾಗೂ ಇತರೆ ವರ್ಗದ 8ನೇ ತರಗತಿ ವಿದ್ಯಾರ್ಥಿಗಳಿಗೆ (ತಲಾ ರೂ.3,500/-) ಕರ್ನಾಟಕ ದರ್ಶನ ಉಚಿತ ಪ್ರವಾಸ ಕಾರ್ಯಕ್ರಮ. ಈ ಕಾರ್ಯಕ್ರಮದ ಸಂಬಂಧ ಸರ್ಕಾರ ಹೊರಡಿಸಿರುವ ಮಾನದಂಡಗಳನ್ನು ಅನುಬಂಧ-2ರಲ್ಲಿ ಒದಗಿಸಿದೆ. |
| | | | ಪ್ರವಾಸೋದ್ಯಮ ನೀತಿ | 2020-25ರ ಕರ್ನಾಟಕ ಪ್ರವಾಸೋದ್ಯಮ ನೀತಿ | 2020-25ರ ಪ್ರವಾಸೋದ್ಯಮ ನೀತಿ ಯಡಿ ಪ್ರವಾಸೋದ್ಯಮ ಕ್ಷೇತ್ರಗಳಲ್ಲಿ ಬಂಡವಾಳ ಹೂಡಿಕೆ ಮಾಡಲು ಇಚ್ಛಿಸುವ ಖಾಸಗಿ ಬಂಡವಾಳ ಹೂಡಿಕೆದಾರರಿಗೆ ಸಹಾಯಧನ ರಿಯಾಯಿತಿಗಳು ಹಾಗೂ ಪ್ರೋತ್ಸಾಹಕಗಳನ್ನು ನೀಡಲಾಗುವುದು. |

..3..

| | | |
|---|---|---|
| ಆ) | ಪ್ರವಾಸೋದ್ಯಮ ಇಲಾಖೆಯಿಂದ ರೂಪಿಸಿರುವ ಈ ಯೋಜನೆಗಳಿಗಾಗಿ ಕಳೆದ 3 ವರ್ಷಗಳಲ್ಲಿ ಮಂಡ್ಯ ಜಿಲ್ಲೆಗೆ ಬಿಡುಗಡೆ ಮಾಡಿರುವ ಅನುದಾನವೆಷ್ಟು; ಖರ್ಚಾದ ಅನುದಾನವೆಷ್ಟು; ಯಾವ ಯೋಜನೆಗೆ ಎಷ್ಟು ಅನುದಾನ ಖರ್ಚಾಗಿದೆ; (ತಾಲ್ಲೂಕುವಾರು ಮಾಹಿತಿ ನೀಡುವುದು) | ಪ್ರವಾಸೋದ್ಯಮ ಇಲಾಖೆಯಿಂದ ರೂಪಿಸಿರುವ ಯೋಜನೆಗಳಿಗಾಗಿ ಕಳೆದ 3 ವರ್ಷಗಳಲ್ಲಿ ಮಂಡ್ಯ ಜಿಲ್ಲೆಗೆ ರೂ.2525.64 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ ಹಾಗೂ ರೂ.1782.14 ಲಕ್ಷಗಳ ಅನುದಾನವನ್ನು ವೆಚ್ಚ ಮಾಡಲಾಗಿರುತ್ತದೆ. ತಾಲ್ಲೂಕುವಾರು ವಿವರಗಳನ್ನು ಅನುಬಂಧ-3ರಲ್ಲಿ ಒದಗಿಸಿದೆ. |
| ಇ) | ಮಂಡ್ಯ ಜಿಲ್ಲೆಯಲ್ಲಿರುವ ಯಾವ ಯಾವ ಸ್ಥಳಗಳನ್ನು ಪ್ರವಾಸಿ ಸ್ಥಳಗಳೆಂದು ಸರ್ಕಾರವು ಗುರುತಿಸಿದೆ; ಈ ಪ್ರವಾಸಿ ಸ್ಥಳಗಳಿಂದ ಕಳೆದ 3 ವರ್ಷಗಳಲ್ಲಿ ಸರ್ಕಾರದ ಬೊಕ್ಕಸಕ್ಕೆ ಬಂದಿರುವ ಆದಾಯವೆಷ್ಟು ಮತ್ತು ಈ ಪ್ರವಾಸಿ ಸ್ಥಳಗಳ ಅಭಿವೃದ್ಧಿಗಾಗಿ ಸರ್ಕಾರವು ಮಾಡಿರುವ ಖರ್ಚಿನ ವಿವರಗಳನ್ನು ನೀಡುವುದು; | ಕರ್ನಾಟಕ ಪ್ರವಾಸೋದ್ಯಮ ನೀತಿ 2020-25ರಡಿಯಲ್ಲಿ ಮಂಡ್ಯ ಜಿಲ್ಲೆಯಲ್ಲಿ 34 ಪ್ರವಾಸಿ ತಾಣಗಳನ್ನು ಇಲಾಖೆಯಿಂದ ಗುರುತಿಸಲಾಗಿರುತ್ತದೆ. ಸದರಿ ಸ್ಥಳಗಳ ಪ್ರವಾಸಿ ಅಭಿವೃದ್ಧಿಗಾಗಿ ಇಲಾಖೆಯ ವತಿಯಿಂದ ಮಾಡಿರುವ ಖರ್ಚಿನ ವಿವರಗಳನ್ನು ಅನುಬಂಧ-4ರಲ್ಲಿ ಒದಗಿಸಿದೆ.<br><br>ಪ್ರವಾಸೋದ್ಯಮ ಇಲಾಖೆಯು ಸದರಿ ಪ್ರವಾಸಿ ತಾಣಗಳಿಗೆ ಆಗಮಿಸುವ ಪ್ರವಾಸಿಗರಿಗೆ ಮೂಲಭೂತ ಸೌಕರ್ಯ ಅಭಿವೃದ್ಧಿ ಪಡಿಸುವ ಕಾಮಗಾರಿಗಳನ್ನು ಮಾಡುತ್ತಿದ್ದು, ಇದರಿಂದಾಗಿ ಹೆಚ್ಚಿನ ಸಂಖ್ಯೆಯ ಪ್ರವಾಸಿಗರು ಪ್ರವಾಸಿ ತಾಣಗಳಿಗೆ ಆಗಮಿಸಿ ಸ್ಥಳೀಯವಾಗಿ ಉದ್ಯೋಗಾವಕಾಶಗಳು ಸೃಷ್ಠಿಯಾಗಿ ವ್ಯಾಪಾರ ವಹಿವಾಟು ನಡೆದು ಆರ್ಥಿಕ ಅಭಿವೃದ್ಧಿ ಹೊಂದಿ ಪರೋಕ್ಷವಾಗಿ ಸರ್ಕಾರದ ಬೊಕ್ಕಸಕ್ಕೆ ಆದಾಯ ಬಂದಿರುತ್ತದೆ. |
| ಈ) | ಮಂಡ್ಯ ಜಿಲ್ಲೆಯಲ್ಲಿ ಪ್ರವಾಸಿಗರು ಉಳಿದುಕೊಳ್ಳಲು ಇಲಾಖೆ ವತಿಯಿಂದ ಎಷ್ಟು ಯಾತ್ರಿ ನಿವಾಸಿಗಳನ್ನು ನಿರ್ಮಿಸಲಾಗಿದೆ; (ವಿವರ ನೀಡುವುದು) | ಮಂಡ್ಯ ಜಿಲ್ಲೆಯಲ್ಲಿ ಒಟ್ಟು 18 ಯಾತ್ರಿನಿವಾಸಗಳನ್ನು ನಿರ್ಮಿಸಲಾಗಿದ್ದು, ವಿವರಗಳನ್ನು ಅನುಬಂಧ-5ರ ಲ್ಲಿ ಒದಗಿಸಿದೆ. |
| ಉ) | ಟೂರಿಸ್ಟ್ ಟ್ಯಾಕ್ಸಿಗೆ ನೀಡಲಾಗುತ್ತಿರುವ ಸಹಾಯಧನದ ಮೊತ್ತವೆಷ್ಟು; ಅನುಸರಿಸುತ್ತಿರುವ ಮಾನದಂಡಗಳೇನು; ಕಳೆದ 3 ವರ್ಷಗಳಿಂದ ಮಂಡ್ಯ ಜಿಲ್ಲೆಯಲ್ಲಿ ಎಷ್ಟು ಜನ ನಿರುದ್ಯೋಗಿ ಯುವಕರಿಗೆ ಟೂರಿಸ್ಟ್ ಟ್ಯಾಕ್ಸಿ ಸೌಲಭ್ಯವನ್ನು ನೀಡಲಾಗಿದೆ? (ವಿವರಗಳನ್ನು ನೀಡುವುದು) | ಎಸ್.ಸಿ.ಎಸ್.ಪಿ./ಟಿ.ಎಸ್.ಪಿ. ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಸಾಮಾನ್ಯ ಯೋಜನೆಯಡಿಯಲ್ಲಿ ಹಿಂದುಳಿದ ಮತ್ತು ಅಲ್ಪಸಂಖ್ಯಾತ ವರ್ಗದ ವಿದ್ಯಾವಂತ ನಿರುದ್ಯೋಗಿ ಅಭ್ಯರ್ಥಿಗಳಿಗೆ ಇಲಾಖೆಯಿಂದ ರೂ.3.00 ಲಕ್ಷಗಳ ಸಹಾಯಧನವನ್ನು ನೀಡಲಾಗುತ್ತಿದ್ದು, ಪ್ರವಾಸಿ ಟ್ಯಾಕ್ಸಿ ವಿತರಣೆ ಯೋಜನೆ ಸಂಬಂಧ ಸರ್ಕಾರ ಹೊರಡಿಸಿರುವ ಮಾನದಂಡಗಳನ್ನು ಅನುಬಂಧ-1ರಲ್ಲಿ ಒದಗಿಸಿದೆ.<br><br>ಮಂಡ್ಯ ಜಿಲ್ಲೆಯಲ್ಲಿ ಪ್ರವಾಸೋದ್ಯಮ ಇಲಾಖೆಯ ವತಿಯಿಂದ ಕಳೆದ 3 ವರ್ಷಗಳಿಂದ (2018-19 ರಿಂದ 2020-21) ರವರೆಗೆ ಒಟ್ಟು 31 ಯುವಜನತೆಗೆ ಪ್ರವಾಸಿ ಟ್ಯಾಕ್ಸಿಗಳನ್ನು ನೀಡಲಾಗಿದೆ. ವಿವರ ಕೆಳಕಂಡಂತಿದೆ. |

| ಕ್ರ. ಸಂ. | ವರ್ಷ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ಮತ್ತು ಅಲ್ಪಸಂಖ್ಯಾತ | ಒಟ್ಟು |
|---|---|---|---|---|---|
| 1. | 2018-19 | 14 | 5 | 12 | 31 |
| 2. | 2019-20 | 0 | 0 | 0 | 0 |
| 3. | 2020-21 | ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಯೋಜನೆಯಡಿ ಸಹಾಯಧನವನ್ನು ನೀಡಿರುವುದಿಲ್ಲ. | | | |
| | ಒಟ್ಟು | 14 | 5 | 12 | 31 |

ಸಂಖ್ಯೆ: **TOR 317 TDV 2021**

**(ಆನಂದ್ ಸಿಂಗ್)**
ಪ್ರವಾಸೋದ್ಯಮ ಹಾಗೂ
ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಅನುಬಂಧ-I

**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ: 2016-17ನೇ ಸಾಲಿನಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವರ್ಗದ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಪ್ರವಾಸಿ ಟ್ಯಾಕ್ಸಿಗಳನ್ನು ವಿತರಿಸುವ ಸಂಬಂಧ ಮಾರ್ಗಸೂಚಿಗಳು

ಓದಲಾಗಿದೆ: ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆರವರ ಕಡತ ಸಂಖ್ಯೆ: ಪ್ರಇ/ಯೋ-1/26/2016-17.

* * * *

ಪ್ರಸ್ತಾವನೆ:

ಮೇಲೆ ಓದಲಾದ ಕಡತದಲ್ಲಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆರವರು 2016-17ನೇ ಸಾಲಿನಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ. ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪಂಗಡದ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಕಲ್ಪಿಸಿಕೊಡಲು, ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸುವ ಸಂಬಂಧ ಸಿದ್ಧಪಡಿಸಿರುವ ಪರಿಷ್ಕೃತ ಮಾರ್ಗಸೂಚಿಗಳಿಗೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ

**ಸರ್ಕಾರದ ಆದೇಶ ಸಂಖ್ಯೆ:ಪ್ರಇ 243 ಪ್ರವಾಯೋ 2016 ದಿನಾಂಕ:8-9-2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2016-17ನೇ ಸಾಲಿನಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ. ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪಂಗಡದ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಕಲ್ಪಿಸಿಕೊಡಲು, ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸುವ ಸಂಬಂಧ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ ಪರಿಷ್ಕೃತ ಮಾರ್ಗಸೂಚಿಗಳಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ಬಿ.ಎನ್.ಯತಿರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಇವರಿಗೆ:

1. ಮಹಾಲೇಖಪಾಲರು(ಲೆಕ್ಕಪತ್ರ/ಲೆಕ್ಕಪರಿಶೋಧನೆ), ಕರ್ನಾಟಕ, ಬೆಂಗಳೂರು
2. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
3. ಎಲ್ಲಾ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ.
4. ಶಾಖಾರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

**ಸರ್ಕಾರದ ಆದೇಶ ಸಂಖ್ಯೆ: ಪ್ರಇ 243 ಪ್ರವಾಯೋ 2016 ದಿನಾಂಕ: 8-9-2016ಕ್ಕೆ ಅನುಬಂಧ.**

2016-17ನೇ ಸಾಲಿನಲ್ಲಿ ಪ್ರವಾಸೋದ್ಯಮ ಇಲಾಖೆಯಲ್ಲಿ ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿ ಯೋಜನೆ ಅಡಿಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸುವ ಸಂಬಂಧ ತಯಾರಿಸಿರುವ ಮಾರ್ಗಸೂಚಿಗಳು.

**ಯೋಜನೆ:**

- ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಲಘು ವಾಹನ ಚಾಲನಾ ಪರವಾನಗಿ ಹೊಂದಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಅರ್ಹ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಕಲ್ಪಿಸಿಕೊಳ್ಳುವ ದೃಷ್ಟಿಯಿಂದ ಪ್ರವಾಸಿ ತಾಣಗಳಿಗೆ ಪ್ರವಾಸಿಗರನ್ನು ಕರೆದುಕೊಂಡು ಹೋಗಲು ಸಹಾಯಧನದ ಮೂಲಕ ಪ್ರವಾಸಿ ಟ್ಯಾಕ್ಸಿಗಳನ್ನು ಒದಗಿಸುವುದು.

**ಯೋಜನೆಯ ಘಟಕ ವೆಚ್ಚ:**

ಫಲಾನುಭವಿಯು ಸ್ವ-ಇಚ್ಛೆಯಿಂದ ಯಾವುದೇ ಮಾದರಿಯ ವಾಹನವನ್ನು ಖರೀದಿಸಬಹುದು. ಈ ವಾಹನದ ಘಟಕ ವೆಚ್ಚದ ವಿವರವು ಕೆಳಕಂಡಂತಿದೆ.

- ಇಲಾಖೆಯ ಸಹಾಯಧನ - ರೂ.2.00 ಲಕ್ಷಗಳು ಮಾತ್ರ.
- ಫಲಾನುಭವಿಯ ವಂತಿಗೆ - ವಾಹನದ ಒಟ್ಟು ವೆಚ್ಚದ ಶೇ.5 ರಷ್ಟು.
- ಬ್ಯಾಂಕ್ ಸಾಲ - ವಾಹನದ ಒಟ್ಟು ವೆಚ್ಚದಲ್ಲಿ ಉಳಿದ ಮೊತ್ತ.

**ಜಿಲ್ಲಾವಾರು ಗುರಿ :**

ಇಲಾಖೆಯಿಂದ ಪ್ರತಿ ಜಿಲ್ಲೆಗೆ ನಿಗಧಿಪಡಿಸಿದ ಅಭ್ಯರ್ಥಿಗಳ ಗುರಿಯನ್ನು ಜಿಲ್ಲಾಧಿಕಾರಿಗಳು ತಮ್ಮ ಜಿಲ್ಲೆಯ ತಾಲ್ಲೂಕುವಾರು ಜನಸಂಖ್ಯೆಗೆ ಅನುಗುಣವಾಗಿ ನಿಗಧಿಪಡಿಸುವುದು. ಈ ಗುರಿಯನ್ನು ಜಿಲ್ಲೆಯಲ್ಲಿರುವ ಲೀಡ್ ಬ್ಯಾಂಕ್(ಡಿ.ಎಲ್.ಬಿ.ಸಿ)ಗೆ ರವಾನಿಸಿ ಬ್ಯಾಂಕ್ ಸಾಲ ಮಂಜೂರು ಮಾಡಿಸಲು ಕ್ರಮ ವಹಿಸುವುದು.

**ಪ್ರವಾಸಿ ಟ್ಯಾಕ್ಸಿ ವಿತರಣೆ ಪ್ರಕ್ರಿಯೆ ಕಾಲಾವಧಿ :**

| ಕ್ರ.ಸಂ. | ಪ್ರಕ್ರಿಯೆ | ದಿನಾಂಕ |
|---|---|---|
| 1 | ಅರ್ಜಿ ಆಹ್ವಾನಿಸಲು ಪತ್ರಿಕಾ ಪ್ರಕಟಣೆ ಹೊರಡಿಸುವುದು | ಪ್ರವಾಸೋದ್ಯಮ ನಿರ್ದೇಶಕರು ನಿರ್ಧರಿಸುವುದು. |
| 2 | ಅರ್ಜಿ ವಿತರಣೆ | |
| 3 | ಅರ್ಜಿ ಸ್ವೀಕರಿಸುವುದು | |
| 4 | ಸ್ವೀಕರಿಸಿದ ಅರ್ಜಿಗಳ ಪರಿಶೀಲನೆ | |
| 5 | ಪರಿಶೀಲಿಸಿದ ಅರ್ಜಿಗಳ ಪಟ್ಟಿಯನ್ನು ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ ಸಭೆ ಕರೆದು ಸಮಿತಿಯ ಮುಂದೆ ಮಂಡಿಸಿ ಫಲಾನುಭವಿಗಳನ್ನು ಆಯ್ಕೆ ಮಾಡುವುದು | |
| 6 | ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆ ಆಹ್ವಾನ | |
| 7 | ಸ್ವೀಕರಿಸಿದ ಆಕ್ಷೇಪಣೆಗಳ ಇತ್ಯರ್ಥಪಡಿಸುವುದು | |

| ಕ್ರ.ಸಂ | ಪ್ರಕ್ರಿಯೆ | ದಿನಾಂಕ |
|---|---|---|
| 8 | ಅಂತಿಮ ಫಲಾನುಭವಿಗಳ ಆಯ್ಕೆ ಪಟ್ಟಿ ಪ್ರಕಟಣೆ | ಪ್ರವಾಸೋದ್ಯಮ ನಿರ್ದೇಶಕರು ನಿರ್ಧರಿಸುವುದು. |
| 9 | ಫಲಾನುಭವಿಗಳ ಪಟ್ಟಿಯನ್ನು ಬ್ಯಾಂಕ್ ಸಾಲ ಒದಗಿಸಲು ಬ್ಯಾಂಕ್‌ಗೆ ಸಲ್ಲಿಸುವುದು | |
| 10 | ಬ್ಯಾಂಕ್ ಸಾಲ ಮಂಜೂರಾದ ನಂತರ ಇಲಾಖೆಯ ಸಹಾಯಧನವನ್ನು ಬ್ಯಾಂಕ್‌ಗೆ ಜಮಾ ಮಾಡುವುದು | |
| 11 | ಪ್ರವಾಸಿ ಟ್ಯಾಕ್ಸಿ ವಿತರಣೆ | |
| 12 | ಪ್ರವಾಸಿ ಟ್ಯಾಕ್ಸಿ ವಿತರಣೆ ಮಾಡಿರುವ ಬಗ್ಗೆ ಇಲಾಖೆಗೆ ವರದಿ ಸಲ್ಲಿಸಲು ಕೊನೆಯ ದಿನ | |

**ಆಯ್ಕೆ ಸಮಿತಿ :**

**ಫಲಾನುಭವಿಗಳ ಅರ್ಹತಾ ಪಟ್ಟಿ ಆಯ್ಕೆ ಮಾಡುವ ಸಮಿತಿ**

ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸುವುದು.

1. ಉಪ ವಿಭಾಗಾಧಿಕಾರಿಗಳು- ಅಧ್ಯಕ್ಷರು.
2. ತಹಶೀಲ್ದಾರ್ (ಆಯಾ ಜಿಲ್ಲಾ ಕೇಂದ್ರ ಸ್ಥಾನದಲ್ಲಿರುವವರು).
3. ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು-ಸದಸ್ಯ ಕಾರ್ಯದರ್ಶಿಗಳು.
4. ಜಿಲ್ಲಾ ಸಮಾಜ ಕಲ್ಯಾಣ ಇಲಾಖೆ ಅಧಿಕಾರಿ, ಡಿಎಸ್‌ಡಬ್ಲ್ಯು -ಸದಸ್ಯರು.
5. ಜಿಲ್ಲಾ ಸಮಗ್ರ ಗಿರಿಜನ ಅಭಿವೃದ್ಧಿ ಅಧಿಕಾರಿ-ಸದಸ್ಯರು.
6. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅಧಿಕಾರಿ (ಬೆಂಗಳೂರು ನಗರಕ್ಕೆ ಸಂಬಂಧಿಸಿದಂತೆ)-ಸದಸ್ಯರು
7. ಪ್ರಾದೇಶಿಕ ಸಾರಿಗೆ ಅಧಿಕಾರಿ - ಸದಸ್ಯರು.
8. ವ್ಯವಸ್ಥಾಪಕರು, ಲೀಡ್ ಬ್ಯಾಂಕ್ - ಸದಸ್ಯರು.
9. ಡಾ: ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದ ಅಧಿಕಾರಿ - ಸದಸ್ಯರು.
10. ಪರಿಶಿಷ್ಟ ಪಂಗಡದ ಅಭಿವೃದ್ಧಿ ನಿಗಮದ ಅಧಿಕಾರಿ - ಸದಸ್ಯರು.

**ಆಯ್ಕೆ ವಿಧಾನ:**

- ಫಲಾನುಭವಿಗಳ ಆಯ್ಕೆಯಲ್ಲಿ ಅಭ್ಯರ್ಥಿಯ ವಯಸ್ಸು ಹಾಗೂ ಎಸ್.ಎಸ್.ಎಲ್.ಸಿ ಪಡೆದ ಅಂಕದ ಶೇಕಡ (%) ಎರಡರ ಆಧಾರದ ಮೇಲೆ ಕ್ರಮವಾಗಿ ೬೦ ಮತ್ತು ೪೦ ಆದ್ಯತೆಯನ್ನು ನೀಡಿ ಈ ಕೆಳಕಂಡ ಮಾನದಂಡಗಳ ಮೂಲಕ ಆಯ್ಕೆ ಮಾಡುವುದು.

1. ಅಭ್ಯರ್ಥಿಯ ವಯಸ್ಸಿನ ಜೇಷ್ಠತೆ ಮೇರೆಗೆ. -

ಸೂತ್ರ = ಅಭ್ಯರ್ಥಿ ವಯಸ್ಸು x 100 / ನಿಗಧಿಪಡಿಸಿದ ವಯಸ್ಸು (40)

= ಬರುವ ಫಲಿತಾಂಶ x 60 / 100 = ಅಭ್ಯರ್ಥಿಯ ವಯಸ್ಸಿನ ಜೇಷ್ಠತೆ ಮೇರೆಗೆ ಪಡೆದ ಫಲಿತಾಂಶ

[A]

2. ಎಸ್.ಎಸ್.ಎಲ್.ಸಿ ಯಲ್ಲಿ ಪಡೆದ ಅಂಕಗಳ ಜೇಷ್ಠತ ಮೇರಗೆ :-

ಸೂತ್ರ = ಎಸ್.ಎಸ್.ಎಲ್.ಸಿ ಯಲ್ಲಿ ಅಭ್ಯರ್ಥಿಯು ಪಡೆದ ಒಟ್ಟು ಅಂಕಗಳ ಶೇಕಡ x 100 / ನಿಗಧಿಪಡಿಸಿರುವ ಅಂಕದ ಮಿತಿ [45%]

= ಬರುವ ಫಲಿತಾಂಶ x 40 / ೧೦೦ = ಎಸ್.ಎಸ್.ಎಲ್.ಸಿ ಯಲ್ಲಿ ಪಡೆದ ಅಂಕಗಳ ಜೇಷ್ಠತೆ ಮೇರೆಗೆ ಪಡೆದ ಫಲಿತಾಂಶ

[B]

ಅಭ್ಯರ್ಥಿಯ ವಯಸ್ಸಿನ ಜೇಷ್ಠತ ಮೇರೆಗೆ ಪಡೆದ ಫಲಿತಾಂಶ[A] + ಎಸ್.ಎಸ್.ಎಲ್.ಸಿ ಯಲ್ಲಿ ಪಡೆದ ಅಂಕಗಳ ಜೇಷ್ಠತ ಮೇರಗೆ ಪಡೆದ ಫಲಿತಾಂಶ [B]

= ಅಭ್ಯರ್ಥಿ ಪಡೆಯುವ ಒಟ್ಟು ಶೇಕಡವಾರು ಫಲಿತಾಂಶ.

ಅಭ್ಯರ್ಥಿಯು ಪಡೆಯುವ ಒಟ್ಟು ಶೇಕಡವಾರು ಫಲಿತಾಂಶದ ಏರಿಕೆಯಿಂದ ಇಳಿಕೆ ಕ್ರಮದಲ್ಲಿ [Descending Order] ಬರುವ ಶೇಕಡವಾರು ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡತಕ್ಕದ್ದು.

3. ಮಹಿಳೆಯರಿಗೆ ಶೇ. 10% ರಷ್ಟು ಗುರಿಗಳನ್ನು ಮೀಸಲಿರಿಸುವುದು. ಮಹಿಳಾ ಅಭ್ಯರ್ಥಿಗಳು ಅರ್ಜಿ ಸಲ್ಲಿಸದೇ ಇದ್ದಲ್ಲಿ, ಪುರುಷ ಅಭ್ಯರ್ಥಿಗಳಿಗೆ ಸದರಿ ಗುರಿಗಳನ್ನು ಹಂಚಿಕೆ ಮಾಡತಕ್ಕದ್ದು.

ಫಲಾನುಭವಿಗಳ ಆಯ್ಕೆಯಲ್ಲಿ ಆದ್ಯತೆ ನೀಡಬೇಕಾದ ಅಂಶಗಳು:

- ನಿಯಮ ರೀತ್ಯ ಮಹಿಳೆಯರು ಅರ್ಜಿ ಸಲ್ಲಿಸಿದ್ದಲ್ಲಿ ಆದ್ಯತೆ ನೀಡಬಹುದಾಗಿದೆ.
- ಬಿ.ಪಿ.ಎಲ್. ರೇಖೆಗಿಂತ ಕೆಳಗಿರುವವರಿಗೆ ಆದ್ಯತೆ ನೀಡತಕ್ಕದ್ದು.
- ಅಭ್ಯರ್ಥಿಯ ಕುಟುಂಬದಲ್ಲಿ ಯಾವ ಒಬ್ಬ ಸದಸ್ಯನು ಸರ್ಕಾರಿ ನೌಕರಿ ಹೊಂದಿಲ್ಲದ ಇರುವುದನ್ನು ಖಚಿತಪಡಿಸಿಕೊಳ್ಳಬೇಕು.
- ಈಗಾಗಲೇ ಕುಟುಂಬದ ಸದಸ್ಯನೊಬ್ಬನು ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿದ್ದರ ಅದೇ ಕುಟುಂಬದ ಮತ್ತೊಬ್ಬ ಸದಸ್ಯನಿಗೆ ಈ ಅವಕಾಶ ನೀಡಬಾರದು. ಕುಟುಂಬದ ಸದಸ್ಯನು ವಿವಾಹವಾಗಿ ಪ್ರತ್ಯೇಕವಾಗಿ ವಾಸವಿದ್ದಲ್ಲಿ, ಅರ್ಜಿ ಸಲ್ಲಿಸಲು ಅವಕಾಶ ನೀಡಬಹುದಾಗಿದೆ.

ವಾಹನ ಸಾಲ ಮೇಳ:

- ಪ್ರವಾಸಿ ಟ್ಯಾಕ್ಸಿ ಖರೀದಿಸಲು ಎಲ್ಲಾ ಜಿಲ್ಲೆಯಲ್ಲಿಯೂ ಫಲಾನುಭವಿಗಳಿಗೆ ಸೂಕ್ತವಾದ ಬ್ಯಾಂಕ್ ಸಾಲ ದೊರಕುವಂತೆ ಮಾಡಲು ಲೀಡ್ ಬ್ಯಾಂಕ್ ವ್ಯವಸ್ಥಾಪಕರೊಂದಿಗೆ ಹಾಗೂ ವಿವಿಧ ವಾಹನ ಏಜೆನ್ಸಿಯವರೊಂದಿಗೆ ವಾಹನ ಸಾಲ ಮೇಳ ಜರುಗಿಸಿ ಸ್ಥಳದಲ್ಲಿ ಸಾಲ ಮಂಜೂರಿಸಿದ ಬ್ಯಾಂಕ್‌ಗಳಿಗೆ ಮಂಜೂರಾತಿ ಅನುಪಾತಕ್ಕೆ ಅನುಗುಣವಾಗಿ ಸಹಾಯಧನ ವಿತರಿಸುವುದು.

**<u>ಅರ್ಜಿದಾರರು ಹೊಂದಿರಬೇಕಾದ ಅರ್ಹತೆಗಳು :</u>**

ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ಖರೀದಿಸುವ ಯೋಜನೆಯ ಪ್ರಯೋಜನ ಪಡೆಯಲು ಅರ್ಜಿ ಸಲ್ಲಿಸಲು ಅರ್ಜಿದಾರರ ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

ಅ) ಅರ್ಜಿದಾರರು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು.

ಆ) ಅರ್ಜಿದಾರರನ ವಯಸ್ಸು 20 ರಿಂದ 40 ವರ್ಷದೊಳಗಿರಬೇಕು.

ಇ) ಅರ್ಜಿದಾರರು 10ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು.

ಈ) ಅಭ್ಯರ್ಥಿಗಳು ಲಘು ವಾಹನ ಚಾಲನಾ ಪರವಾನಗಿ ಪಡೆದು ಕನಿಷ್ಠ ಒಂದು ವರ್ಷವಾಗಿರಬೇಕು. ಅಭ್ಯರ್ಥಿಗಳು ವಾಹನ ಪರವಾನಗಿಯೊಂದಿಗೆ ಬ್ಯಾಡ್ಜ್ ಹೊಂದಿರತಕ್ಕದ್ದು.

ಉ) ನಗರ ಪ್ರದೇಶದ ಫಲಾನುಭವಿಗಳ ವಾರ್ಷಿಕ ಆದಾಯ ರೂ.2.00 ಲಕ್ಷ ಮೀರಬಾರದು.

ಊ) ಗ್ರಾಮಾಂತರ ಪ್ರದೇಶದ ಫಲಾನುಭವಿಗಳ ವಾರ್ಷಿಕ ಆದಾಯ ರೂ.1.50 ಲಕ್ಷ ಮೀರಬಾರದು

ಋ) ಅರ್ಜಿದಾರರು ಯಾವ ಜಿಲ್ಲೆಯ ನಿವಾಸಿಯಾಗಿರುತ್ತಾರೋ ಅದೇ ಜಿಲ್ಲೆಯಲ್ಲಿ ಅರ್ಜಿ ಸಲ್ಲಿಸಬೇಕು.

ಎ) ಅರ್ಜಿದಾರನು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಅಥವಾ ನಿಗಮ ಮಂಡಳಿಗಳಲ್ಲಿ ಖಾಯಂ ನೌಕರಿಯಲ್ಲಿರಬಾರದು.

ಏ) ಈಗಾಗಲೇ ಕುಟುಂಬದ ಸದಸ್ಯನೊಬ್ಬನು ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿದ್ದರೆ ಅದೇ ಕುಟುಂಬದ ಮತ್ತೊಬ್ಬ ಸದಸ್ಯನಿಗೆ ಈ ಅವಕಾಶ ನೀಡಬಾರದು. ಕುಟುಂಬದ ಸದಸ್ಯನು ವಿವಾಹವಾಗಿ ಪ್ರತ್ಯೇಕವಾಗಿ ವಾಸವಿದ್ದಲ್ಲಿ, ಅರ್ಜಿ ಸಲ್ಲಿಸಲು ಅವಕಾಶ ನೀಡಬಹುದಾಗಿದೆ.

**<u>ಅರ್ಜಿದಾರರು ಸಲ್ಲಿಸಬೇಕಾದ ದಾಖಲೆಗಳು :</u>**

ಅ) ಜಿಲ್ಲಾಧಿಕಾರಿಗಳಿಂದ ಜಾಹೀರಾತು ಪ್ರಕಟಣೆಗೊಂಡ 30 ದಿನಗಳ ಒಳಗಾಗಿ ನಿಗದಿಪಡಿಸಿದ ಅರ್ಜಿ ನಮೂನೆಯನ್ನು ಭರ್ತಿ ಮಾಡಿ ಇತ್ತೀಚಿನ ಭಾವಚಿತ್ರದೊಂದಿಗೆ ದ್ವಿಪ್ರತಿಯಲ್ಲಿ ಸಲ್ಲಿಸಬೇಕು.

ಆ) ಪಡಿತರ ಚೀಟಿ ಹಾಗೂ ಆಧಾರ್ ಕಾರ್ಡ್‌ನ ಪ್ರತಿಗಳನ್ನು ಸಲ್ಲಿಸುವುದು ಕಡ್ಡಾಯವಾಗಿರುತ್ತದೆ.

ಇ) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿರುವ ಬಗ್ಗೆ ತಹಶೀಲ್ದಾರರಿಂದ ಪಡೆದುಕೊಂಡಿರುವ ಚಾಲ್ತಿಯಲ್ಲಿರುವ ಜಾತಿ ಪ್ರಮಾಣ ಪತ್ರದ ಪ್ರತಿ.

ಈ) ತಹಶೀಲ್ದಾರರಿಂದ ಪಡೆದುಕೊಂಡಿರುವ ಚಾಲ್ತಿಯಲ್ಲಿರುವ ಆದಾಯದ ಪ್ರಮಾಣ ಪತ್ರದ ಪ್ರತಿ.

ಉ) ತಹಶೀಲ್ದಾರ್/ಮಹಾನಗರ ಪಾಲಿಕೆ/ನಗರ ಪಾಲಿಕೆ/ನಗರಸಭೆ/ಪುರಸಭೆ/ಗ್ರಾಮ ಪಂಚಾಯ್ತಿ /ಪಟ್ಟಣ ಪಂಚಾಯ್ತಿ-ಗಳಿಂದ ಪಡೆದಿರುವ ವಾಸಸ್ಥಳ ದೃಢೀಕರಣ ಪತ್ರದ ಪ್ರತಿ.

ಊ) ಖಾಯಂ ಲಘು ವಾಹನ ಚಾಲನಾ ಪರವಾನಗಿ ಪತ್ರ ಹಾಗೂ ಆರ್.ಟಿ.ಓ. ರವರಿಂದ ಪಡೆದಿರುವ ಡಿ.ಎಲ್. ಎಕ್ಸ್‌ಟ್ರಾಕ್ಟ್‌ಗಳನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

ಋ) ವಿದ್ಯಾರ್ಹತೆಯ ಬಗ್ಗೆ ಕನಿಷ್ಠ ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾಗಿರುವ ಅಂಕಪಟ್ಟಿಯ ಪ್ರತಿ.

5/-

ಎ) ಅರ್ಜಿದಾರನು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಅಥವಾ ನಿಗಮ ಮಂಡಳಿಗಳಲ್ಲಿ ಖಾಯಂ ನೌಕರಿಯಲ್ಲಿರದ ಬಗ್ಗೆ, ಅಭ್ಯರ್ಥಿಯ ಕುಟುಂಬದಲ್ಲಿ ಯಾವ ಒಬ್ಬ ಸದಸ್ಯನು ಸರ್ಕಾರಿ ನೌಕರಿ ಹೊಂದಿಲ್ಲದ ಬಗ್ಗೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ/ನಗರಸಭೆ/ಪುರಸಭೆ/ಪಟ್ಟಣ ಪಂಚಾಯ್ತಿ /ಗ್ರಾಮ ಪಂಚಾಯ್ತಿ-ಇವುಗಳಿಂದ ಸ್ವಉದ್ಯೋಗ ಕಲ್ಪಿಸಿಕೊಳ್ಳುವ ಸೌಲಭ್ಯ ಪಡೆಯದೇ ಇರುವ ಬಗ್ಗೆ, ಕುಟುಂಬದ ಯಾವ ಸದಸ್ಯನು ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿಲ್ಲ ಎಂಬ ಬಗ್ಗೆ ಹಾಗೂ ಸ್ವಯಂ ಪ್ರಮಾಣೀಕರಿಸಿ, ರೂ.50/-ರ ಬೆಲೆಯ ಛಾಪಾ ಕಾಗದ (Affidavit)ದಲ್ಲಿ ನಮೂನೆ-3ರಲ್ಲಿ ಪ್ರಮಾಣ ಪತ್ರವನ್ನು ಪಡೆಯತಕ್ಕದ್ದು.

ಏ) ಈಗಾಗಲೇ ಕುಟುಂಬದ ಸದಸ್ಯನೊಬ್ಬನು ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿದ್ದರೆ ಅದೇ ಕುಟುಂಬದ ಮತ್ತೊಬ್ಬ ಸದಸ್ಯನಿಗೆ ಈ ಅವಕಾಶ ನೀಡಬಾರದು. ಕುಟುಂಬದ ಸದಸ್ಯನು ವಿವಾಹವಾಗಿ ಪ್ರತ್ಯೇಕವಾಗಿ ವಾಸವಿದ್ದಲ್ಲಿ, ಅರ್ಜಿ ಸಲ್ಲಿಸಲು ಅವಕಾಶ ನೀಡಬಹುದಾಗಿದೆ. ಈ ಸಂಬಂಧ ಅಭ್ಯರ್ಥಿಯಿಂದ ಪಡಿತರ ಚೀಟಿಯನ್ನು ಆಧಾರವಾಗಿ ಪಡೆಯತಕ್ಕದ್ದು.

ಐ) ಅರ್ಜಿಯಲ್ಲಿ ಅಭ್ಯರ್ಥಿಗಳ ದೂರವಾಣಿ ಸಂಖ್ಯೆಗಳನ್ನು ನಮೂದಿಸುವುದು ಕಡ್ಡಾಯ.

ಒ) ಆಯ್ಕೆಯಾದ ನಂತರ ಅಭ್ಯರ್ಥಿಗಳ ವಿರುದ್ಧ ಯಾವುದೇ ಕ್ರಿಮಿನಲ್ ಮೊಕದ್ದಮೆ ಇಲ್ಲದೇ ಇರುವ ಬಗ್ಗೆ ಆಯಾ ವ್ಯಾಪ್ತಿಯ ಪೊಲೀಸ್ ಠಾಣೆಯಿಂದ ಪೊಲೀಸ್ ನಿರಾಕ್ಷೇಪಣಾ ಪತ್ರವನ್ನು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಪಡೆಯುವುದು.

ಓ) ಅರ್ಜಿದಾರನು ಮೇಲಿನ ಎಲ್ಲಾ ದಾಖಲಾತಿಗಳನ್ನು ಸ್ವಯಂ ದೃಢೀಕರಿಸಿ ಸಲ್ಲಿಸತಕ್ಕದ್ದು.

ಔ) ಆಯ್ಕೆಯಾದ ಅಭ್ಯರ್ಥಿಗಳಿಂದ ತಮಗೆ ವಿತರಿಸುವ ಪ್ರವಾಸಿ ವಾಹನವನ್ನು ಯಾರಿಗೂ ಪರಬಾರೆ ಮಾಡುವುದಿಲ್ಲವೆಂದು ನೋಟರಿಯಿಂದ ಪ್ರಮಾಣೀಕರಿಸಿ ರೂ.50/-ರ ಬೆಲೆಯ ಛಾಪಾ ಕಾಗದ (Affidavit)ದಲ್ಲಿ ಮುಚ್ಚಳಿಕೆ ಪಡೆಯತಕ್ಕದ್ದು.

**<u>ಷರತ್ತುಗಳು :</u>**

ಅ) ಫಲಾನುಭವಿಯೇ ಸ್ವತಃ ಟ್ಯಾಕ್ಸಿಯನ್ನು ಓಡಿಸಬೇಕು ಹೊರತು ಬೇರೆಯವರಿಗೆ ಪರಬಾರೆ ಮಾಡುವಂತಿಲ್ಲ. ಒಂದು ವೇಳೆ ಪರಭಾರೆ ಮಾಡಿರುವುದು ಕಂಡುಬಂದಲ್ಲಿ ಟ್ಯಾಕ್ಸಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಈ ಬಗ್ಗೆ ಜಿಲ್ಲಾಧಿಕಾರಿಗಳು ಆರ್.ಟಿ.ಒ.ಗಳಿಗೆ ಪತ್ರ ಮುಖೇನ ತಿಳಿಸುವುದು. ಸದರಿ ವಾಹನವನ್ನು (05) ವರ್ಷಗಳವರೆಗೆ ಬೇರೆಯವರಿಗೆ ವರ್ಗಾವಣೆ ಮಾಡದಂತೆ ಕ್ರಮವಹಿಸುವುದು.

ಆ) ಪ್ರತಿ ವರ್ಷ ಫಲಾನುಭವಿಯು ಗಳಿಸಿದ ಆದಾಯದ ವಿವರಗಳನ್ನು ಜಿಲ್ಲಾ ಮಟ್ಟದ ಇಲಾಖೆಯ ಕಚೇರಿಗೆ ನೀಡುವುದು.

ಇ) ಫಲಾನುಭವಿಯು ತೆಗೆದುಕೊಳ್ಳುವ ಬ್ಯಾಂಕಿನ ಸಾಲದ ಮೊತ್ತವನ್ನು ನಿರಂತರವಾಗಿ ಮರುಪಾವತಿ ಮಾಡುವುದು.

ಈ) ಫಲಾನುಭವಿಗಳಿಗೆ ವಿತರಿಸುವ ಪ್ರವಾಸಿ ಟ್ಯಾಕ್ಸಿಯನ್ನು ಸಾಲ ಮಂಜೂರಾತಿ ಮಾಡಿದ ಬ್ಯಾಂಕ್ ಹೆಸರಿಗೆ ಅಡಮಾನಿಕ (Hypothecation) ಮಾಡಿಕೊಳ್ಳತಕ್ಕದ್ದು. ಈ ಬಗ್ಗೆ ಸಂಬಂಧಪಟ್ಟ ಅಧೀನ ಕಛೇರಿಯ ಪ್ರವಾಸೋದ್ಯಮ ಇಲಾಖೆಯ ಅಧಿಕಾರಿಗಳು ಅಗತ್ಯ ಕ್ರಮ ವಹಿಸತಕ್ಕದ್ದು.

ಉ) ಫಲಾನುಭವಿಗಳು ಪ್ರವಾಸಿಗರೊಡನೆ ಉತ್ತಮ ನಡವಳಿಕೆಯಿಂದ ವರ್ತಿಸುವುದು. ಕನ್ನಡ ಭಾಷಾ ಜ್ಞಾನ ಹಾಗೂ ಇತರ ಭಾಷೆಗಳ ಪರಿಚಿತಿ, ಪ್ರವಾಸಿ ಸ್ಥಳಗಳ ಪರಿಚಯ ಮುಂತಾದ ವಿಷಯಗಳ ಬಗ್ಗೆ ಸಾಮಾನ್ಯ ಜ್ಞಾನ ಹೊಂದಿದ್ದರೆ ಅನುಕೂಲವಾಗುವುದು.

<u>ಬ್ರಾಂಡಿಂಗ್ :</u>

- ಫಲಾನುಭವಿಯು ಸ್ವ-ಇಚ್ಛೆಯಿಂದ ಯಾವುದೇ ಮಾದರಿಯ ವಾಹನವನ್ನು ಖರೀದಿಸಬಹುದು. ವಾಹನದ ಮೇಲೆ ಪ್ರವಾಸೋದ್ಯಮ ಇಲಾಖೆಯ ಲೋಗೋ, "ಪ್ರವಾಸೋದ್ಯಮ ಇಲಾಖೆ ನೆರವು" ಎಂದು ವಾಹನಗಳ ಮೇಲೆ ಚಿತ್ತರಿಸತಕ್ಕದ್ದು ಹಾಗೂ ಬ್ರಾಡಿಂಗ್ ಬಗ್ಗೆ ಸರ್ಕಾರ ಮುಂದೆ ಯಾವುದೇ ಅದೇಶ ಹೊರಡಿಸಿದ್ದಲ್ಲಿ ಅದನ್ನು ಪಾಲಿಸತಕ್ಕದ್ದು.

<u>ಅಧೀನ ಕಛೇರಿಗಳ ಜವಾಬ್ದಾರಿಗಳು :</u>

- ಪ್ರವಾಸಿ ಟ್ಯಾಕ್ಸಿ ವಿತರಣೆ ಪ್ರಕ್ರಿಯೆಗೆ ಸಂಬಂಧಿಸಿದಂತೆ ಪ್ರಕ್ರಿಯೆ ಕೈಗೊಂಡ ಬಗ್ಗೆ ಪ್ರತಿ ಮಾಹೆ ನಿಗದಿತ ನಮೂನೆ-1 ರಲ್ಲಿ ಜಿಲ್ಲಾಧಿಕಾರಿಗಳಿಗೆ ಹಾಗೂ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆಗೆ ಕಡ್ಡಾಯವಾಗಿ ಮೂಲಕ ವರದಿ ಸಲ್ಲಿಸುವುದು.
- ಆಯ್ಕೆಯಾದ ಫಲಾನುಭವಿಗಳ ಪಟ್ಟಿ (Soft and Hard Copy)ಯನ್ನು ನಿಗದಿತ ನಮೂನೆ-2 ರಲ್ಲಿ ಕೇಂದ್ರ ಕಛೇರಿ ತಪ್ಪದೇ ಸಲ್ಲಿಸುವುದು.

<u>ವಿಶೇಷ ಸೂಚನೆ :</u>

- ಈ ಕಾರ್ಯಕ್ರಮವನ್ನು ನಿಗದಿತ ಸಮಯದಲ್ಲಿ ಅನುಷ್ಠಾನಗೊಳಿಸಿ ಈ ಕಾರ್ಯಕ್ರಮದ ಪ್ರಯೋಜನವನ್ನು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಜನಾಂಗದವರಿಗೆ ತಲುಪಿಸಲು ನಿರ್ಲಕ್ಷ್ಯ ತೋರಿಸಿದ ಅಧಿಕಾರಿಯು "ಕರ್ನಾಟಕ ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನ (ಯೋಜನೆ ರೂಪಿಸುವುದು, ಆರ್ಥಿಕ ಸಂಪನ್ಮೂಲಗಳ ಹಂಚಿಕೆ ಮತ್ತು ಬಳಕೆ) ಅಧಿನಿಯಮ, 2013 ರ ಅಧ್ಯಾಯ-IV ಕಂಡಿಕೆ 24" ರ ಅನ್ವಯ ದಂಡನೆಗೆ ಒಳಗಾಗುತ್ತಾರೆ.

[ಬಿ.ಎಸ್. ಯತಿರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಪ್ರವಾಸಿ ಟ್ಯಾಕ್ಸಿ ವಿತರಣೆ ಯೋಜನೆಯಡಿಯಲ್ಲಿ ನೀಡುವ ಸಹಾಯಧನವನ್ನು ಹೆಚ್ಚಳ ಮಾಡಲು ಮಂಜೂರಾತಿ.

ಓದಲಾಗಿದೆ: ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆರವರ ಪತ್ರ ಸಂಖ್ಯೆ: ಪ್ರಇ/ಯೋ-1/01/2017-18

ಕರ್ನಾಟಕ ಸರ್ಕಾರ ಪ್ರವಾಸೋದ್ಯಮ ಇಲಾಖೆ 153 22 APR 2017 ಸ್ವೀಕರಿಸಿದೆ ಸಹಿ:

• • • •

ಪ್ರಸ್ತಾವನೆ:

ಮೇಲೆ ಓದಲಾದ ಪತ್ರದಲ್ಲಿ, ಪ್ರವಾಸೋದ್ಯಮ ನಿರ್ದೇಶಕರು ಬೆಂಗಳೂರುರವರು SCP/TSP ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಹಾಗೂ ಸಾಮಾನ್ಯ ಯೋಜನೆಯಡಿಯಲ್ಲಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗಗಳಿಗೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳು ಸ್ವ-ಉದ್ಯೋಗ ಕಲ್ಪಿಸಿಕೊಳ್ಳಲು ತಲಾ ರೂ.2.00 ಲಕ್ಷಗಳ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿಗಳನ್ನು 2016-17ನೇ ಸಾಲಿನವರೆಗೆ ವಿತರಿಸಲು ಕ್ರಮವಹಿಸಲಾಗಿದೆ ಎಂದು ತಿಳಿಸಿರುತ್ತಾರೆ.

2017-18ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಉಪಯೋಜನೆ ಹಾಗೂ ಪರಿಶಿಷ್ಟ ಪಂಗಡ ಉಪಯೋಜನೆ ಅಡಿ ಪ್ರವಾಸೋದ್ಯಮ ಇಲಾಖೆಗೆ ರೂ.28.59 ಕೋಟಿಗಳನ್ನು ಒದಗಿಸಲಾಗಿದೆ.[ಪರಿಶಿಷ್ಟ ಜಾತಿ ಉಪಯೋಜನೆ ರೂ.20.18 ಕೋಟಿಗಳು, ಪರಿಶಿಷ್ಟ ಪಂಗಡ ಉಪಯೋಜನೆ ರೂ.8.41 ಕೋಟಿಗಳು]

ಸಮಾಜಕಲ್ಯಾಣ ಇಲಾಖೆಗೆ ಸಂಬಂಧಪಟ್ಟಂತೆ, 2017-18ನೇ ಸಾಲಿನ ಮುಖ್ಯಮಂತ್ರಿಗಳ ಬಜೆಟ್ ಭಾಷಣದ ಕಂಡಿಕೆ-171ರಲ್ಲಿ ಕೆಳಗಿನಂತೆ ಘೋಷಿಸಲಾಗಿದೆ ಎಂದು ತಿಳಿಸಿರುತ್ತಾರೆ.

"ವಾಹನಾ ಚಾಲನಾ ಪರವಾನಗಿ ಹೊಂದಿರುವ 3500 ಪರಿಶಿಷ್ಟ ಜಾತಿ ಮತ್ತು 1500 ಪರಿಶಿಷ್ಟ ಪಂಗಡಗಳ ನಿರುದ್ಯೋಗಿ ಯುವಕರಿಗೆ ಟೂರಿಸ್ಟ್ ಟ್ಯಾಕ್ಸಿಗಳನ್ನು ಖರೀದಿಸಲು 3 ಲಕ್ಷ ರೂ.ಗಳವರೆಗೆ ಅಥವಾ ವಾಹನದ ಶೇ.50 ರಷ್ಟು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಸಹಾಯಧನ ನೀಡಲಾಗುವುದು. ಉಳಿದ ಮೊತ್ತವನ್ನು ಬ್ಯಾಂಕ್‌ಗಳಿಂದ ಸಾಲದ ರೂಪದಲ್ಲಿ ಪಡೆಯಬಹುದು"

JDD 21/4

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ SCP/TSP ಯೋಜನೆ ಹಾಗೂ ಸಾಮಾನ್ಯ ಯೋಜನೆಯಡಿಯಲ್ಲಿ ಪ್ರವಾಸೋದ್ಯಮ ಇಲಾಖೆಯಲ್ಲಿ ವಿತರಿಸುತ್ತಿರುವ ಪ್ರವಾಸಿ ಟ್ಯಾಕ್ಸಿಗಳ ಸಹಾಯಧನವನ್ನು ರೂ.2.00 ಲಕ್ಷಗಳಿಂದ ರೂ.3.00 ಲಕ್ಷಗಳಿಗೆ ಹೆಚ್ಚಳ ಮಾಡಲು ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

21/4

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ.

## ಸರ್ಕಾರದ ಆದೇಶ ಸಂಖ್ಯೆ:ಪ್ರಇ 188 ಪ್ರವಾಯೋ 2017 ದಿನಾಂಕ:20-4-2017

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ 2017-18ನೇ ಸಾಲಿನಿಂದ SCP/TSP ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಹಾಗೂ

ಸಾಮಾನ್ಯ ಯೋಜನೆಯಡಿಯಲ್ಲಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗಗಳಿಗೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳು ಸ್ವ-ಉದ್ಯೋಗ ಕಲ್ಪಿಸಿಕೊಳ್ಳುವ ಸಲುವಾಗಿ ರೂ.3.00 ಲಕ್ಷ(ರೂಪಾಯಿ ಮೂರು ಲಕ್ಷಗಳು ಮಾತ್ರ)ಗಳ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿಗಳನ್ನು ವಿತರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಸದರಿ ವೆಚ್ಚಕ್ಕೆ ತಗಲುವ ವೆಚ್ಚವನ್ನು 2017-18ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಟಜಾತಿ ಉಪಯೋಜನೆ ಹಾಗೂ ಪರಿಶಿಷ್ಟ ಪಂಗಡ ಉಪಯೋಜನೆ ಅಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ ಎಫ್.ಡಿ. 03 ಟಿ.ಎಫ್.ಪಿ.2016 ದಿ:2-4-2016ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

20.4.1

(ಹೆಚ್.ಕೆ. ರವಿಮೂರ್ತಿ)
ಸರ್ಕಾರದ ಅಪರ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಇವರಿಗೆ:

1. ಮಹಾಲೇಖಪಾಲರು(ಲೆಕ್ಕಪತ್ರ/ಲೆಕ್ಕಪರಿಶೋಧನೆ), ಕರ್ನಾಟಕ, ಬೆಂಗಳೂರು
2. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
3. ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್ ವೃತ್ತ, ಬೆಂಗಳೂರು-1
4. ಶಾಖಾರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಪ್ರತಿ: 1) ಮಾನ್ಯ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ಪ್ರವಾಸೋದ್ಯಮ ಸಚಿವರ ಆಪ್ತಕಾರ್ಯದರ್ಶಿ.

2) ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ವಿಕಾಸ ಸೌಧ. ಇವರಿಗೆ - ಮಾಹಿತಿ ಗಾಗಿ



(27)

ಕರ್ನಾಟಕ ಸರ್ಕಾರ

ಸಂಖ್ಯೆ: ಪ್ರಇ 47 ಪ್ರವಾಯೋ 2017

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:06.02.2017

## ತಿದ್ದುಪಡಿ ಆದೇಶ

2016–17ನೇ ಸಾಲಿನಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸಲು ಮಂಜೂರಾತಿ ನೀಡಿ ಹೊರಡಿಸಿರುವ ಆದೇಶ ಸಂಖ್ಯೆ: ಪ್ರಇ 243 ಪ್ರವಾಯೋ 2016, ದಿನಾಂಕ:08.09.2016ರ ಅನುಬಂಧದಲ್ಲಿರುವ ಆಯ್ಕೆ ವಿಧಾನದ ಕ್ರಮ ಸಂಖ್ಯೆ:3ರಲ್ಲಿ **"ಮಹಿಳೆಯರಿಗೆ ಶೇ.10ರಷ್ಟು ಗುರಿಗಳನ್ನು ಮೀಸಲಿರಿಸುವುದು"** ಎಂಬುದರ ಬದಲಿಗೆ **"ಮಹಿಳೆಯರಿಗೆ ಶೇ.15ರಷ್ಟು ಗುರಿಗಳನ್ನು ಮೀಸಲಿರಿಸುವುದು"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
6/2/17
[ಬಿ.ಎನ್.ಯತಿರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಇವರಿಗೆ,

1. ಮಹಾಲೇಖಪಾಲರು (ಲೆಕ್ಕ ಪತ್ರ /ಲೆಕ್ಕ ಪರಿಶೋದನೆ) ಕರ್ನಾಟಕ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.
3. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
4. ಎಲ್ಲಾ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ.
5. ಜಂಟಿ ನಿರ್ದೇಶಕರು, ರಾಜ್ಯ ಹುಜೂರು ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು–01.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಪ್ರತಿ:

1. ಮಾನ್ಯ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ಪ್ರವಾಸೋದ್ಯ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ.
2. ಮಾನ್ಯ ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ.



**ಕರ್ನಾಟಕ ಸರ್ಕಾರ**

ಸಂಖ್ಯೆ: ಪ್ರಇ 47 ಪ್ರವಾಯೋ 2017

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:06.02.2017

## ತಿದ್ದುಪಡಿ ಆದೇಶ

2016-17ನೇ ಸಾಲಿನಲ್ಲಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸಲು ಮಂಜೂರಾತಿ ನೀಡಿ ಹೊರಡಿಸಲಾಗಿರುವ ಆದೇಶ ಸಂಖ್ಯೆ:ಪ್ರಇ 297 ಪ್ರವಾಯೋ 2016, ದಿನಾಂಕ:02.11.2016ರ ಅನುಬಂಧ-1ರಲ್ಲಿನ ಆಯ್ಕೆ ವಿಧಾನದ ಕ್ರಮ ಸಂಖ್ಯೆ:3ರಲ್ಲಿ **"ಮಹಿಳೆಯರಿಗೆ ಶೇ.10ರಷ್ಟು ಗುರಿಗಳನ್ನು ಮೀಸಲಿರಿಸುವುದು"** ಎಂಬುದರ ಬದಲಿಗೆ **"ಮಹಿಳೆಯರಿಗೆ ಶೇ.15ರಷ್ಟು ಗುರಿಗಳನ್ನು ಮೀಸಲಿರಿಸುವುದು"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

Yatiraj 6/2/17

[ಬಿ.ಎನ್.ಯತಿರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ.

ಇವರಿಗೆ,

1. ಮಹಾಲೇಖಪಾಲರು (ಲೆಕ್ಕ ಪತ್ರ /ಲೆಕ್ಕ ಪರಿಶೋಧನೆ) ಕರ್ನಾಟಕ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.
3. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
4. ಎಲ್ಲಾ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ.
5. ಜಂಟಿ ನಿರ್ದೇಶಕರು, ರಾಜ್ಯ ಹುಜೂರು ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು-01.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಪ್ರತಿ:

1. ಮಾನ್ಯ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ಪ್ರವಾಸೋದ್ಯ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ.
2. ಮಾನ್ಯ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರ ಆಪ್ತ ಕಾರ್ಯದರ್ಶಿ.

(12)

# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ**: 2016-17ನೇ ಸಾಲಿನಲ್ಲಿ SCSP/TSP ಯೋಜನೆಯಡಿ ರಾಜ್ಯದ ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಲಿಯುತ್ತಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಕರ್ನಾಟಕ ದರ್ಶನ ಪ್ರವಾಸಿ ಕಾರ್ಯಕ್ರಮ ಏರ್ಪಡಿಸಲು ಮಂಜೂರಾತಿ.

**ಓದಲಾಗಿದೆ**: ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆರವರ ಪತ್ರ ಸಂಖ್ಯೆ: ಪ್ರಇ/ಯೋ-1/43/2016-17-2874 ದಿ:14-9-2016.

* * * *

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು ಪ್ರವಾಸೋದ್ಯಮ ಇಲಾಖೆ ಬೆಂಗಳೂರು ಇವರು 2016-17ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಟ ಜಾತಿಯ ಉಪಯೋಜನೆ ಅಡಿಯಲ್ಲಿ ರೂ.20.65 ಕೋಟಿಗಳನ್ನು ಹಾಗೂ ಗಿರಿಜನ ಉಪಯೋಜನೆ ಅಡಿಯಲ್ಲಿ ರೂ.6.48 ಕೋಟಿಗಳನ್ನು ಅಂದರೆ ಒಟ್ಟು ರೂ.27.13 ಕೋಟಿಗಳನ್ನು ಪ್ರವಾಸೋದ್ಯಮ ಇಲಾಖೆಗೆ ಒದಗಿಸಲಾಗಿದೆ. ಈ ಅನುದಾನದಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸ್ವ-ಉದ್ಯೋಗ ಕಲ್ಪಿಸಿಕೊಳ್ಳಲು ಪ್ರವಾಸಿ ಟ್ಯಾಕ್ಸಿಗಳನ್ನು ವಿತರಿಸುವುದು, ರಾಜ್ಯದಲ್ಲಿ ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಲಿಯುತ್ತಿರುವ ಮಕ್ಕಳಿಗೆ ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮ ಹಾಗೂ ಡಾ.ಬಿ.ಆರ್. ಅಂಬೇಡ್ಕರ್‌ರವರ ಜೀವನ ಮತ್ತು ಸಾಧನೆಗೆ ಸಂಬಂಧಿಸಿದ ಸ್ಥಳಗಳಿಗೆ ಪ್ರವಾಸ ಕಾರ್ಯಕ್ರಮ ಹಮ್ಮಿಕೊಳ್ಳಲು ಉದ್ದೇಶಿಸಲಾಗಿದೆ ಎಂದು ವರದಿ ಮಾಡಿರುತ್ತಾರೆ.

2016-17ನೇ ಸಾಲಿನಲ್ಲಿ ರೂ.784.45 ಲಕ್ಷಗಳ ವೆಚ್ಚದಲ್ಲಿ ರಾಜ್ಯದ ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಲಿಯುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ 22413 ವಿದ್ಯಾರ್ಥಿಗಳಿಗೆ[ಪರಿಶಿಷ್ಟ ಜಾತಿ 14871 ಮತ್ತು ಪರಿಶಿಷ್ಟ ಪಂಗಡದ 7542 ವಿದ್ಯಾರ್ಥಿಗಳು] ಕರ್ನಾಟಕ ದರ್ಶನ ಪ್ರವಾಸಿ ಕಾರ್ಯಕ್ರಮ ಹಮ್ಮಿಕೊಳ್ಳಲು ಉದ್ದೇಶಿಸಲಾಗಿದ್ದು, ಈ ಕಾರ್ಯಕ್ರಮ ಏರ್ಪಡಿಸಲು ಒಬ್ಬ ವಿದ್ಯಾರ್ಥಿಗೆ ರೂ.3500/- ವೆಚ್ಚವಾಗಬಹುದೆಂದು ಕೆಳಕಂಡಂತೆ ಅಂದಾಜಿಸಲಾಗಿದೆ ಎಂದು ತಿಳಿಸುತ್ತಾ, ಈ ಸಂಬಂಧ ಸಲ್ಲಿಸಿದ್ದ ಕ್ರಿಯಾಯೋಜನೆಗೆ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿ:15-7-2016 ರಂದು ನಡೆದ ರಾಜ್ಯ ಅನುಸೂಚಿತ ಜಾತಿ/ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ತಿನ ಸಭೆಯಲ್ಲಿ ಅನುಮೋದಿಸಲಾಗಿದೆ ಎಂದು ತಿಳಿಸಿ ವಿವರ ನೀಡಿರುತ್ತಾರೆ.

| | |
|---|---|
| ಪರಿಶಿಷ್ಟ ಜಾತಿ ಉಪಯೋಜನೆ ಅಡಿ 14871 ವಿದ್ಯಾರ್ಥಿಗಳಿಗೆ [ಗುರಿ 14871x3500] | ರೂ.5,20,48,500/- |
| ಗಿರಿಜನ ಉಪಯೋಜನೆ ಅಡಿ 7542 ವಿದ್ಯಾರ್ಥಿಗಳಿಗೆ [ಗುರಿ 7542x3500] | ರೂ.2,63,97,000/- |
| ಒಟ್ಟು | ರೂ.7,84,45,500/- |

2/-

ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಜನಸಂಖ್ಯೆ, ಪ್ರವಾಸಿ ತಾಣಗಳ ಸಂಖ್ಯೆ ಹಾಗೂ ಎಸ್.ಡಿ.ಪಿ. ತಾಲ್ಲೂಕುಗಳ ಸಂಖ್ಯೆಗಳ ಸರಾಸರಿ ಶೇಕಡವಾರು ಆಧಾರದ ಮೇಲೆ ಜಿಲ್ಲಾವಾರು ವಿದ್ಯಾರ್ಥಿಗಳ ಭೌತಿಕ ಗುರಿ ಹಾಗೂ ಅನುದಾನವನ್ನು ನಿಗಧಿಪಡಿಸಿರುವ ಗುರಿಯಂತೆ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಟ್ಟು 22413 ವಿದ್ಯಾರ್ಥಿಗಳಿಗೆ ಕರ್ನಾಟಕ ದರ್ಶನ ಪ್ರವಾಸ ಏರ್ಪಡಿಸಲು ಒಟ್ಟು ರೂ.7,84,45,500/-ಗಳನ್ನು ರಾಜ್ಯದ 30 ಜಿಲ್ಲೆಗಳಲ್ಲಿರುವ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ. ಹಾಗೂ ವೆಚ್ಚವನ್ನು ಕೆಳಕಂಡಂತೆ ಭರಿಸಲಾಗುವುದೆಂದು ನಿರ್ದೇಶಕರು ತಿಳಿಸಿರುತ್ತಾರೆ.

| ಕ್ರ.ಸಂ | ಲೆಕ್ಕಶೀರ್ಷಿಕೆ ಸಂಖ್ಯೆ | ಬಿಡುಗಡೆ ಮಾಡುತ್ತಿರುವ ಅನುದಾನ [ರೂ.] |
|---|---|---|
| 1 | ಪರಿಶಿಷ್ಟ ಜಾತಿ ಉಪಯೋಜನೆ ಲೆಕ್ಕಶೀರ್ಷಿಕೆ 3452-80-104-0-01-422[ಯೋಜನೆ] 2016-17 | 5,20,48,500/- |
| 2 | ಗಿರಿಜನ ಉಪಯೋಜನೆ ಲೆಕ್ಕಶೀರ್ಷಿಕೆ 3452-80-104-0-01-423[ಯೋಜನೆ] 2016-17 | 1,33,00,000/- |
| 3 | ಗಿರಿಜನ ಉಪಯೋಜನೆ ಲೆಕ್ಕಶೀರ್ಷಿಕೆ 3452-80-001-0-03-423[ಯೋಜನೆ] 2016-17 | 1,30,97,000/- |
| | ಒಟ್ಟು ರೂ. | 7,84,45,500/- |

**ಆದ್ದರಿಂದ, ಕೆಳಕಂಡಂತೆ ಆದೇಶ.**

**<u>ಸರ್ಕಾರದ ಆದೇಶ ಸಂಖ್ಯೆ:ಪ್ರಇ 286 ಪ್ರವಾಯೋ 2016 ದಿನಾಂಕ:26-9-2016.</u>**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2016-17ನೇ ಸಾಲಿನಲ್ಲಿ SCSP/TSP ಯೋಜನೆಯಡಿ ರಾಜ್ಯದ ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಲಿಯುತ್ತಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಕರ್ನಾಟಕ ದರ್ಶನ ಪ್ರವಾಸ ಕಾರ್ಯಕ್ರಮವನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-2ರಲ್ಲಿ ನಮೂದಿಸಿರುವ ಮಾರ್ಗಸೂಚಿಗಳನ್ನು ಅನುಸರಿಸಿ ಏರ್ಪಡಿಸಲು ರೂ. 7,84,45,500/-[ರೂ. ಏಳು ಕೋಟಿ ಎಂಬತ್ತ ನಾಲ್ಕು ಲಕ್ಷದ ನಲವತ್ತೈದು ಸಾವಿರದ ಐನೂರು ಮಾತ್ರ]ಗಳನ್ನು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧ-1ರಲ್ಲಿರುವ ರಾಜ್ಯದ 30 ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಬಿಡುಗಡೆ ಮಾಡಲು ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಸದರಿ ವೆಚ್ಚವನ್ನು 2016-17ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 3452-80-104-0-01-422 [ಯೋಜನೆ], 3452-80-104-0-01-423[ಯೋಜನೆ], ಮತ್ತು ಲೆಕ್ಕಶೀರ್ಷಿಕೆ 3452-80-001-0-03-423[ಯೋಜನೆ]ರಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ ಎಫ್.ಡಿ. 03 ಟಿ.ಎಫ್.ಪಿ.2016 ದಿ:2-4-2016ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
26/9/16
(ಬಿ.ಎಸ್.ಯತಿರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಇವರಿಗೆ

1. ಮಹಾಲೇಖಪಾಲರು(ಲೆಕ್ಕಪತ್ರ/ಲೆಕ್ಕಪರಿಶೋಧನೆ), ಕರ್ನಾಟಕ, ಬೆಂಗಳೂರು
2. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
3. ಎಲ್ಲಾ ಜಿಲ್ಲಾ ಪಂಚಾಯತ್‌ನ ಮುಖ್ಯಕಾರ್ಯನಿರ್ವಹಣಾಧಿಕಾರಿಗಳು.
4. ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್ ವೃತ್ತ, ಬೆಂಗಳೂರು-1
5. ಶಾಖಾರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಅನುಬಂಧ - 2

**ಸರ್ಕಾರದ ಆದೇಶ ಸಂಖ್ಯೆ: ಪ್ರಇ 286 ಪ್ರವಾಯೋ 2016, ದಿನಾಂಕ:26-09-2016 ಕ್ಕೆ ಅನುಬಂಧ-2**

**2016-17ನೇ ಸಾಲಿನಲ್ಲಿ, ಪರಿಶಿಷ್ಟ ಜಾತಿಯ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಕರ್ನಾಟಕ ದರ್ಶನ ಪ್ರವಾಸ ಕೈಗೊಳ್ಳುವ ಸಂಬಂಧ ಸಿದ್ಧಪಡಿಸಿರುವ ಮಾರ್ಗಸೂಚಿಗಳು**

**ಕರ್ನಾಟಕ ದರ್ಶನದ ಸಾಮಾನ್ಯ ಉದ್ದೇಶಗಳು :-**

- ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಪರಿಪೂರ್ಣವಾಗಿ ರಾಜ್ಯದಲ್ಲಿರುವ ಮುಖ್ಯವಾದ ಪ್ರವಾಸಿ ಸ್ಥಳಗಳು ಅಂದರೆ ಸ್ಥಳೀಯ ವೈಜ್ಞಾನಿಕ, ಧಾರ್ಮಿಕ, ಭೌಗೋಳಿಕ, ನೈಸರ್ಗಿಕ, ಐತಿಹಾಸಿಕ, ವಿಜ್ಞಾನ ಮತ್ತು ಕೈಗಾರಿಕೆಗಳು, ಉತ್ತಮ ಶಾಲೆ, ಆಕಾಶವಾಣಿ ಕೇಂದ್ರ, ಗಣಿಗಳು, ಉದ್ಯಾನವನ, ಮ್ಯೂಸಿಯಂ, ಪ್ರಖ್ಯಾತ ವ್ಯಕ್ತಿಗಳು ಹುಟ್ಟಿದ ಊರು ಇತ್ಯಾದಿಯನ್ನು ಅರಿಯುವುದು.
- ಮಕ್ಕಳು ತಮ್ಮ ಶೈಕ್ಷಣಿಕ ಜೀವನವನ್ನು ರೂಪಿಸಿಕೊಳ್ಳಲು ಸಹಕಾರಿಯಾಗುವಂತೆ ಮಾರ್ಗದರ್ಶನವನ್ನು ನೀಡುವುದು.
- ಮಕ್ಕಳಲ್ಲಿ ಸಹಕಾರ, ಹೊಂದಾಣಿಕೆ, ನಾಯಕತ್ವ ಮನೋಭಾವವನ್ನು ಬೆಳೆಸುವುದು.
- ಕರ್ನಾಟಕ ಸಾಂಸ್ಕೃತಿಕ ಪರಂಪರೆಯ ಅರಿವು ಹಾಗೂ ಅಭಿವೃದ್ಧಿಗೊಳಿಸುವಲ್ಲಿ ಮಕ್ಕಳ ಭಾಗವಹಿಸುವಿಕೆಯನ್ನು ಪ್ರೋತ್ಸಾಹಿಸುವುದು.
- ಕರ್ನಾಟಕ ಸಾಮಾಜಿಕ ಸ್ಥಿತಿಗತಿಯ ಕುರಿತು ಅರಿವುಂಟು ಮಾಡುವುದು.
- ಮಕ್ಕಳಿಗೆ ನೈಜ ಪರಿಸರದ ದರ್ಶನ ಮಾಡಿಸುವುದು.
- ತರಗತಿ ಕಲಿಕೆಗೆ ಪೂರಕವಾದ ಮಾಹಿತಿ ಒದಗಿಸುವುದು.
- ಶಾಲಾ ಚಟುವಟಿಕೆಗಳನ್ನು, ಹೊರಪ್ರಪಂಚ ಹಾಗೂ ಸಮಾಜದೊಂದಿಗೆ ಸಮನ್ವಯಗೊಳಿಸುವುದು.
- ಕರ್ನಾಟಕ ಐತಿಹಾಸಿಕ ವಿಷಯಗಳ ನೈಜ ಸ್ಥಿತಿಯ ದರ್ಶನ ಮಾಡಿಸುವುದು.
- ಪ್ರಾದೇಶಿಕ ಮಟ್ಟದ ಜನಜೀವನ, ಭಾಷೆ, ಆಚಾರ ವಿಚಾರಗಳಲ್ಲಿನ ವೈವಿಧ್ಯತೆಯ ಅರಿವುಂಟು ಮಾಡುವುದು.

**ನಿರ್ದಿಷ್ಟ ಉದ್ದೇಶಗಳು :-**

- ಮಕ್ಕಳು ಶಿಕ್ಷಣದಲ್ಲಿ ಆಸಕ್ತಿ ಬೆಳೆಸಿಕೊಂಡು ಪಠ್ಯೇತರ ಹಾಗೂ ಶೈಕ್ಷಣಿಕ ಚಟುವಟಿಕೆಗಳಲ್ಲಿ ಹೆಚ್ಚು ಉತ್ಸಾಹದಿಂದ ಭಾಗವಹಿಸುವುದು. ಮಕ್ಕಳು ಶಾಲೆಯತ್ತ ಹೆಚ್ಚು ಆಕರ್ಷಿತರಾಗಿ ಶಾಲೆ ಬಿಡುವ ಸಾಧ್ಯತೆಗಳು ಕಡಿಮೆಯಾಗುವುದು.
- ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಗಂಡು ಮಕ್ಕಳು ಹಾಗೂ ಹೆಣ್ಣು ಮಕ್ಕಳು ರಾಜ್ಯದ ಅನೇಕ ಸ್ಥಳಗಳ ನೈಜ ಪರಿಸರ ದರ್ಶನ ಪಡೆಯಲು ಸಹಕಾರಿಯಾಗುವುದು.
- ಮಕ್ಕಳ ಕೀಳರಿಮೆ ಹೋಗಲಾಡಿಸುವುದು.
- ಮಕ್ಕಳಲ್ಲಿ ಸ್ಪರ್ಧಾತ್ಮಕ ಮನೋಭಾವ ಬೆಳೆಸುವುದು.
- ಮಕ್ಕಳಲ್ಲಿ ಪಠ್ಯವಸ್ತುವಿನ ಸಾಮರ್ಥ್ಯಗಳ ಬೆಳವಣಿಗೆಗೆ ಸಹಕಾರಿಯಾಗುವುದು.
- ವಿದ್ಯಾರ್ಥಿಗಳಲ್ಲಿ ವೀಕ್ಷಣೆ, ಮೌಖಿಕ ಹಾಗೂ ಲಿಖಿತ ಕೌಶಲ್ಯಗಳ ಸಂವರ್ಧನೆ ಮಾಡುವುದು.

...2

